KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – I | ಬೆಂಗಳೂರು, ಸೋಮವಾರ, ಮಾರ್ಚ್ ೧, ೨೦೧೦ (ಫಾಲ್ಗುಣ ೧೦, ಶಕ ವರ್ಷ ೧೯೩೧) | ನಂ. ೨೦೬ |
|---|---|---|

**ನಗರಾಭಿವೃದ್ಧಿ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ : ನಅಇ 22 ಎಂಡಬ್ಲ್ಯೂಪಿ 2010, ಬೆಂಗಳೂರು, ದಿನಾಂಕ : 18ನೇ ಫೆಬ್ರವರಿ, 2010**

**ವಿಷಯ :** ಅಂಗವಿಕಲರಿಗೆ ಸಾರ್ವಜನಿಕ ಮತ್ತು ಅರೆ ಸಾರ್ವಜನಿಕ ಕಟ್ಟಡಗಳಲ್ಲಿ ಅಡೆತಡೆ ರಹಿತ ವಾತಾವರಣ ನಿರ್ಮಿಸುವ ಬಗ್ಗೆ.

ಬೆಂಗಳೂರು ಮಹಾನಗರ ಪಾಲಿಕೆಯ ಅಧಿಸೂಚನೆ ಸಂಖ್ಯೆ : ಜೆಡಿಡಿಪಿ/ಪಿಎಸ್/ಪಿಆರ್/20/02–03, ದಿನಾಂಕ : 30–06–2004 ರಲ್ಲಿ ಬೆಂಗಳೂರು ಮಹಾನಗರ ಪಾಲಿಕೆ ಕಟ್ಟಡಗಳ ಉಪವಿಧಿ 2003ನ್ನು ಹೊರಡಿಸಿದೆ. ಈ ಅಧಿಸೂಚನೆಯಲ್ಲಿ ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಅಧಿನಿಯಮ 1995ಕ್ಕೆ ಸಂಬಂಧಿಸಿದ ಅಂಶಗಳನ್ನು ಅಳವಡಿಸಿಕೊಳ್ಳಲಾಗಿದೆ. ದಿನಾಂಕ: 06–04–2004 ರಂದು ಸರ್ಕಾರವು ಸುತ್ತೋಲೆ ಸಂಖ್ಯೆ: ನಅಇ 34 ಟಿಎಂಎಸ್ 2004 ರ ಮೂಲಕ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳು ಜಾರಿಯಲ್ಲಿರುವ ಕಟ್ಟಡ ನಿರ್ಮಾಣ ಬೈಲಾಗಳಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯ ಬೈಲಾ 2003ರನ್ನು ಅಳವಡಿಸಿಕೊಳ್ಳುವಂತೆ ನಿರ್ದೇಶನ ನೀಡಲಾಗಿದೆ. ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಅಧಿನಿಯಮ 1995ರಂತೆ ಅಂಗವಿಕಲ ವ್ಯಕ್ತಿಗಳಿಗೆ ಹಲವಾರು ಸೌಲಭ್ಯಗಳನ್ನು ಒದಗಿಸಬೇಕಾಗಿದೆ. ಅದರಂತೆ ಸಾರ್ವಜನಿಕ, ಅರೆ ಸಾರ್ವಜನಿಕ ಕಟ್ಟಡಗಳಲ್ಲಿ ಅಂಗವಿಕಲರು ಯಾವುದೇ ಅಡೆತಡೆ ಇಲ್ಲದೆ ಓಡಾಡುವ ವಾತಾವರಣ ನಿರ್ಮಿಸಬೇಕಾಗಿದೆ.

2) ಮುಂದುವರೆದು, ರಾಜ್ಯದಲ್ಲಿರುವ ಅಂಗವಿಕಲರ ಕಲ್ಯಾಣಕ್ಕಾಗಿ ಎಲ್ಲಾ ಮಹಾನಗರ ಪಾಲಿಕೆಗಳು/ನಗರಸಭೆಗಳು/ಪುರಸಭೆಗಳು/ಪಟ್ಟಣ ಪಂಚಾಯಿತಿಗಳು/ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ/ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ/ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಮತ್ತು ಎಲ್ಲಾ ನಗರಾಭಿವೃದ್ಧಿ ಪ್ರಾಧಿಕಾರಗಳು ತಮ್ಮ ಹಣಕಾಸಿನ ಮತ್ತು ಅಭಿವೃದ್ಧಿಯ ಮಿತಿಗೊಳಪಟ್ಟು ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಅಧಿನಿಯಮ 1995ರ ಕಲಂ 46ರಂತೆ ಈ ಕೆಳಕಂಡ ಸೌಲಭ್ಯಗಳನ್ನು ಇದುವರೆಗೆ ಕಲ್ಪಿಸದೆ ಇರುವ ಪ್ರಕರಣಗಳಲ್ಲಿ ಕಲ್ಪಿಸಲು ಕ್ರಮ ಕೈಗೊಳ್ಳುವುದು.

"**46. ಕಟ್ಟಡ ಪ್ರದೇಶದಲ್ಲಿ ಸಮಾನ ಅವಕಾಶ ಮಾಡಿಕೊಡುವುದು :** ಸಮುಚ್ಛಿತ ಸರ್ಕಾರ ಮತ್ತು ಸ್ಥಳೀಯ ಪ್ರಾಧಿಕಾರಗಳು ತಮ್ಮ ಹಣಕಾಸಿನ ಮತ್ತು ಅಭಿವೃದ್ಧಿ ಮಿತಿಗಳೊಳಗೆ ಈ ಮುಂದಿನವುಗಳಿಗೆ ಅವಕಾಶ ಕಲ್ಪಿಸತಕ್ಕದ್ದು.

(ಎ) ಸಾರ್ವಜನಿಕ ಕಟ್ಟಡಗಳಲ್ಲಿ ಇಳಿಜಾರು ವ್ಯವಸ್ಥೆ ಹಾಗೂ ರೈಲಿಂಗ್ ವ್ಯವಸ್ಥೆ ಕಲ್ಪಿಸುವುದು.

(ಬಿ) ಗಾಲಿಕುರ್ಚಿ ಬಳಕೆದಾರರಿಗೆ ಅನುಕೂಲವಾಗುವಂತೆ ಶೌಚಾಲಯಗಳ ನಿರ್ಮಾಣ

(ಸಿ) ಎಲಿವೇಟರುಗಳಲ್ಲಿ ಅಥವಾ ಲಿಫ್ಟ್‌ಗಳಲ್ಲಿ ಬ್ರೈಲ್ ಸಂಕೇತಗಳನ್ನು ಮತ್ತು ಶಬ್ದ ಸಂಕೇತಗಳನ್ನು ಕಲ್ಪಿಸುವುದು.

(ಡಿ) ಆಸ್ಪತ್ರೆ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಇತರೆ ವೈದ್ಯಕೀಯ ಚಿಕಿತ್ಸಾ ಸಂಸ್ಥೆ ಮತ್ತು ಪುನರ್ವಸತಿ ಸಂಸ್ಥೆಗಳಲ್ಲಿ ಇಳಿಜಾರು ಮಾರ್ಗ ಕಲ್ಪಿಸುವುದು."

3) ಮೇಲ್ಕಂಡಂತೆ ಕ್ರಮ ಕೈಗೊಳ್ಳುವ/ಕೈಗೊಂಡ ಬಗ್ಗೆ ಸಕ್ಷಮ ಪ್ರಾಧಿಕಾರಗಳು 6 ತಿಂಗಳಿಗೊಮ್ಮೆ ಸರ್ಕಾರಕ್ಕೆ ಪ್ರಗತಿ ವರದಿಗಳನ್ನು ಕಡ್ಡಾಯವಾಗಿ ಸಲ್ಲಿಸಬೇಕು. ಹೊಸದಾಗಿ ನಿರ್ಮಿಸುವ ಸಾರ್ವಜನಿಕ ಕಟ್ಟಡಗಳಲ್ಲಿ ಕಡ್ಡಾಯವಾಗಿ ಅಂಗವಿಕಲ

ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಅಧಿನಿಯಮ 1995ರ ಪ್ರಕಾರ ಅಂಗವಿಕಲರಿಗೆ ಸೌಲಭ್ಯಗಳನ್ನು ಕಲ್ಪಿಸಬೇಕೆಂಬುದನ್ನು ಕಟ್ಟಡ ನಕ್ಷೆ ಅನುಮೋದನೆ ನೀಡುವಾಗ ಕಡ್ಡಾಯಗೊಳಿಸಬೇಕು. ಕಟ್ಟಡ ಅಂತಿಮವಾಗಿ ನಿರ್ಮಾಣಗೊಂಡ ನಂತರ ಪೂರ್ಣಗೊಂಡ ಪ್ರಮಾಣ ಪತ್ರ ನೀಡುವಾಗ ಈ ಸೌಲಭ್ಯಗಳನ್ನು ಅಳವಡಿಸಿಕೊಂಡಿದ್ದಾರೆಯೇ ಎಂಬುದನ್ನು ದೃಢೀಕರಿಸಿಕೊಳ್ಳಬೇಕು.

4) ಈಗಾಗಲೇ ನಿರ್ಮಿಸಿರುವ ಸಾರ್ವಜನಿಕ ಕಟ್ಟಡಗಳನ್ನು, ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಅಧಿನಿಯಮ 1995ರ ಪ್ರಕಾರ ಕಟ್ಟಡಗಳನ್ನು ಸೂಕ್ತವಾಗಿ ಮಾರ್ಪಡಿಸಿ ಅಂಗವಿಕಲರಿಗೆ ಒಂದು ನಿಗಧಿತ ಅವಧಿಯನ್ನು ಗೊತ್ತುಪಡಿಸಿಕೊಂಡು, ಆದ್ಯತೆ ಮೇರೆಗೆ ಸೌಲಭ್ಯಗಳನ್ನು ಕಲ್ಪಿಸಬೇಕು. ಸರ್ಕಾರಕ್ಕೆ ಅನುಪಾಲನಾ ವರದಿಯನ್ನು ಸಲ್ಲಿಸಬೇಕು.

5) ಈ ಸುತ್ತೋಲೆಯಲ್ಲಿನ ಅಂಶಗಳನ್ನು ಚಾಚು ತಪ್ಪದೆ ಕಡ್ಡಾಯವಾಗಿ ಪಾಲಿಸತಕ್ಕದ್ದು. ಸದರಿ ಸುತ್ತೋಲೆಯ ಅಂಶಗಳನ್ನು ಪಾಲಿಸಲು ವಿಫಲವಾದ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳನ್ನೇ ನೇರವಾಗಿ ಹೊಣೆಗಾರರನ್ನಾಗಿ ಮಾಡಿ ಅವರ ವಿರುದ್ಧ ಸೂಕ್ತ ಕ್ರಮ ಜರುಗಿಸಲಾಗುವುದು.

**ಎಸ್. ರೇಣುಕಾರಾಧ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೧, ೨೦೧೦ (ಫಾಲ್ಗುಣ ೧೦, ಶಕ ವರ್ಷ ೧೯೩೧) | ನಂ. ೨೦೭ |
|---|---|---|

### ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂ. ಸಾರಿಇ : 03 : ಸಾಇಪ : 2009, ಬೆಂಗಳೂರು, ದಿನಾಂಕ : 24ನೇ ಫೆಬ್ರವರಿ, 2010**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರಚನೆಯಿಂದಾಗಿ ನಗರದ ವ್ಯಾಪ್ತಿ ಹೆಚ್ಚಾಗಿರುವ ಕಾರಣ ನಗರದ ಹೊರ ವಲಯಗಳು ಮತ್ತು ಹೊಸದಾಗಿ ರಚನೆಯಾಗಿರುವ ಬಡಾವಣೆಗಳಲ್ಲಿ ಆಟೋರಿಕ್ಷಾಗಳಿಗೆ ಬೇಡಿಕೆ ಹೆಚ್ಚಾಗುತ್ತಿದೆ. ಆದುದರಿಂದ ಬೆಂಗಳೂರು ನಗರದಲ್ಲಿ ಈಗ ವಿಧಿಸಿರುವ ನಿರ್ಬಂಧವನ್ನು ಸಡಿಲಿಸಿ ಆಟೋರಿಕ್ಷಾಗಳಿಗೆ ಹೊಸ ರಹದಾರಿಗಳನ್ನು ಮಂಜೂರು ಮಾಡುವುದು ಸೂಕ್ತವಾಗಿರುವುದರಿಂದ ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಬೆಂಗಳೂರಿನಲ್ಲಿ ಈಗಿರುವ ಆಟೋರಿಕ್ಷಾಗಳ ಪರವಾನಗಿ ಮಿತಿಯನ್ನು 80,000 ರಿಂದ 85,000 ಕ್ಕೆ ಹೆಚ್ಚಿಸಿರುತ್ತದೆ.

ಬೆಂಗಳೂರು ನಗರ ಹೊರ ವಲಯಗಳಲ್ಲಿ ಆಟೋರಿಕ್ಷಾಗಳು ಕಡಿಮೆ ಇದ್ದು, ಅಲ್ಲಿನ ನಾಗರೀಕರಿಗೆ ಆಟೋರಿಕ್ಷಾ ಸೌಲಭ್ಯಗಳು ಅತ್ಯಲ್ಪವಾಗಿರುತ್ತದೆ. ನಗರದ ಮಧ್ಯಭಾಗದಿಂದ ಆಟೋರಿಕ್ಷಾಗಳು ಹೊರವಲಯದಲ್ಲಿ ಸಂಚರಿಸಿ ಅಲ್ಲಿನ ನಾಗರೀಕರಿಗೆ ಸಾರಿಗೆ ಸೌಲಭ್ಯ ನೀಡಲು ಮುಂದೆ ಬರುತ್ತಿಲ್ಲ. ಬೆಂಗಳೂರು ನಗರದ ಮಧ್ಯ ಭಾಗದಲ್ಲಿ ವಾಹನಗಳ ದಟ್ಟಣೆ ಅತಿ ಹೆಚ್ಚಾಗಿ ವಾಯುಮಾಲಿನ್ಯ ಮತ್ತು ಶಬ್ದ ಮಾಲಿನ್ಯದಿಂದ ಬಳಲುತ್ತಿದೆ. ಈ ಎಲ್ಲಾ ಕಾರಣಗಳನ್ನು ಗಮನದಲ್ಲಿಟ್ಟುಕೊಂಡು ಸರ್ಕಾರ ಈಗ ಹೆಚ್ಚಿಸಿರುವ 5,000 ಆಟೋರಿಕ್ಷಾ ಪರವಾನಗಿಗಳನ್ನು ತಿಂಗಳಿಗೆ 500 ರಹದಾರಿಗಳನ್ನು ಮೀರದಂತೆ ಆಟೋಚಾಲಕರ ಸಂಘಗಳೊಂದಿಗೆ ಸಮಾಲೋಚನೆ ಮಾಡಿ ಅವರುಗಳನ್ನು ಸೇರಿಸಿಕೊಂಡು (involve) ಆಟೋರಿಕ್ಷಾ ರಹದಾರಿಯನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಆದೇಶಿಸಿದೆ.

1. ಈ ಅಧಿಸೂಚನೆಯಲ್ಲಿ ಬಿಡುಗಡೆ ಮಾಡಿರುವ ರಹದಾರಿಗಳನ್ನು ಬೆಂಗಳೂರು ನಗರದಲ್ಲಿ ಹೊಸದಾಗಿ ರಚನೆಯಾಗಿರುವ ಪ್ರಾದೇಶಿಕ ಸಾರಿಗೆ ಕಛೇರಿಗಳಾದ ಜ್ಞಾನಭಾರತಿ, ಎಲೆಕ್ಟ್ರಾನಿಕ್ ಸಿಟಿ, ಕೆ.ಆರ್.ಪುರಂ, ಯಲಹಂಕ ಮತ್ತು ನೆಲಮಂಗಲ ಕಛೇರಿಗಳ ವ್ಯಾಪ್ತಿಗೆ ಬರುವ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರಿದ ಪ್ರದೇಶಗಳಲ್ಲಿ ಮಾತ್ರ ಸಂಚರಿಸಲು ರಹದಾರಿ ಮಂಜೂರು ಮಾಡತಕ್ಕದ್ದು.
2. ವಾಯು ಮಾಲಿನ್ಯ ಮತ್ತು ಶಬ್ದ ಮಾಲಿನ್ಯ ಉಂಟು ಮಾಡದೇ ಇರುವಂತಹ ಹೊಸ 4 ಸ್ಟ್ರೋಕ್ ಇಂಜಿನ್‌ವುಳ್ಳ ಮತ್ತು ಅಧಿಕೃತ ಎಲ್.ಪಿ.ಜಿ. ಕಿಟ್ ಹಾಗೂ ಡಿಜಿಟಲ್ ಫೇರ್ ಮೀಟರ್ ಅಳವಡಿಸಿರುವ ಹಸಿರು ಬಣ್ಣದ ವಾಹನಗಳಿಗೆ ಮಾತ್ರ ರಹದಾರಿಗಳನ್ನು ನೀಡತಕ್ಕದ್ದು.
3. ಆಟೋರಿಕ್ಷಾ ಚಾಲನಾ ಅನುಜ್ಞಾ ಪತ್ರ ಹೊಂದಿರತಕ್ಕಂತಹ ಮತ್ತು ಆಟೋರಿಕ್ಷಾ ಹೊಂದಿರುವ ಅಭ್ಯರ್ಥಿಗಳಿಗೆ ಮಾತ್ರ ರಹದಾರಿಗಳನ್ನು ಮಂಜೂರು ಮಾಡತಕ್ಕದ್ದು.
4. ಈಗಾಗಲೇ ಆಟೋರಿಕ್ಷಾ ಪರವಾನಗಿ ಹೊಂದಿರುವವರಿಗೆ ಪುನಃ ಪರವಾನಗಿ ನೀಡತಕ್ಕದ್ದಲ್ಲ.

5. ರಹದಾರಿಗಾಗಿ ಅರ್ಜಿ ಸಲ್ಲಿಸುವವರಿಂದ ವಿಳಾಸ ಪುರಾವೆಗಾಗಿ ಕೆಳಕಂಡ ಯಾವುದಾದರೂ ಒಂದು ದಾಖಲೆ ಪಡೆಯತಕ್ಕದ್ದು.

| | |
|---|---|
| 1) ಮತದಾರರ ಗುರುತಿನ ಚೀಟಿ | 4) Pan card |
| 2) ಪಡಿತರ ಚೀಟಿ | 5) ವಿದ್ಯುತ್ ಪಾವತಿಸಿದ ಬಿಲ್ |
| 3) ಪಾಸ್‌ಪೋರ್ಟ್ | 6) ವಾಟರ್ ಬಿಲ್ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ನರಸಿಂಹರಾಜು**
ಪೀಠಾಧಿಕಾರಿ (ಪ್ರ), ಸಾರಿಗೆ ಇಲಾಖೆ
(080–22032014)

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಸೋಮವಾರ, ಮಾರ್ಚ್ ೧, ೨೦೧೦ (ಫಾಲ್ಗುಣ ೧೦, ಶಕ ವರ್ಷ ೧೯೩೧) | ನಂ. ೨೦೮ |
|---|---|---|

## COMMERCE AND INDUSTRIES SECRETARIAT

## NOTIFICATION

**No. CI. 120. MMM. 2007. Bangalore, Dated : 25th February, 2010**

Minerals are valuable finite and non-renewable natural resources, which are critical for the growth of any State/Country. Most of these mineral deposits are in Government, Forest and Revenue lands. There should de some attempt to conserve and use these resources judiciously in the interest of natural development and revenue mobilization by the State for the welfare of the poor. The State Government in the Mineral Policy, 2008 has resolved to encourage persons who add value to the mineral especially by setting up steel plants, since this end-use of mineral attracts huge investment in the state and lead to considerably higher value addition which in turn results in increased tax revenue and employment generation. Grant of mining leases for captive use by the steel industry will not only boost revenue mobilization, but, also helps in employment generation, industrialization, peripheral development and other indirect benefits. It is a proven fact that, the states stand to gain substantially both in terms of revenues, industrialization, economic development and employment, if the minerals are used for value addition rather than exported in their raw from. As a step in this direction, following virgin areas is notified inviting applications from the value adders to the minerals.

**SCHEDULE OF THE AREA FOR GRANT:-**

| Sl.No. | Mineral | Extent in acres | Location |
|---|---|---|---|
| 1. | Iron ore, Manganese, Limestone and Dolomite | 20-00 | Lakkihalli village, Hosadurga taluk, Chitradurga District. |

The application for grant of Mining lease shall be received by the Director of Mines and Geology, No.49, "Khanija Bhavan", D.Devaraj Urs Road, Bangalore-1. The sketch of the area is available for inspection at the office of the Director, Department of Mines and Geology, Khanija Bhavan, D.Devaraj Urs Road, Bangalore-1 during working hours on all working days.

The starting date for filing Mining lease application shall be first day after completion of 30 days from the date of publication of the Notification in the Official Gazette. The closing date/end date for filing Mining lease application shall be 30th day from the starting date. If the last date for filing Mining lease applications happens to be a Public Holiday or General Holiday, applications will be received on the next working day.

The applicants should note that the availability of the area published herein is subject to the clearance from the Revenue Department for mining activities and compliance of the MM (D&R) Act, 1957 and the Mineral Concession Rules, 1960 and all other relevant Acts and Rules by the applicants. In case, the area is found to consist of Forest lands, the clearance from the Forest Department under Section (2) of the Forest Conservation Act, 1980, for utilizing the area for non-forest activities should be obtained by the applicants.

Interested persons are advised to inspect the area and satisfy themselves about the availability of mineral deposits and the present status of the land there in, before making application for Mining lease.

By order and in the name of the Governor of Karnataka,

**M.VASUDEVAMURTHY**
Under Secretary to Government, (Mines)
Commerce & Industries Department.

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೧, ೨೦೧೦ (ಫಾಲ್ಗುಣ ೧೦, ಶಕ ವರ್ಷ ೧೯೩೧) | ನಂ. ೨೦೯ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/299/Bill/2009, Bangalore, Dated : 1st March, 2010**

The following Bill was introduced in Legislative Assembly on 1st March, 2010
**THE CODE OF CRIMINAL PROCEDURE (KARNATAKA AMENDMENT) BILL, 2009**
**(L.A. BILL No. 40 OF 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಐದನೇ ಅಧಿವೇಶನ**

**ದಂಡ ಪ್ರಕ್ರಿಯಾ ಸಂಹಿತೆ (ಕರ್ನಾಟಕ ತಿದ್ದುಪಡಿ) ವಿಧೇಯಕ, 2009**
**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 40)**

ದಂಡ ಪ್ರಕ್ರಿಯಾ ಸಂಹಿತೆ, 1973ನ್ನು ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಲ್ಲಿ ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ದಂಡ ಪ್ರಕ್ರಿಯಾ ಸಂಹಿತೆ, 1973ನ್ನು (1974ರ ಕೇಂದ್ರ ಅಧಿನಿಯಮ 2) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ದಂಡ ಪ್ರಕ್ರಿಯಾ ಸಂಹಿತೆ (ಕರ್ನಾಟಕ ತಿದ್ದುಪಡಿ) ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 25ಎ ಪ್ರಕರಣದ ತಿದ್ದುಪಡಿ.–** ದಂಡ ಪ್ರಕ್ರಿಯಾ ಸಂಹಿತೆ, 1973ರ (1974ರ ಕೇಂದ್ರ ಅಧಿನಿಯಮ ಸಂಖ್ಯೆ 2) 25ಎ ಪ್ರಕರಣದಲ್ಲಿ,–

(ಎ) (2)ನೇ ಉಪ ಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ :–

"(2) ಅಭಿಯೋಗ (ಪ್ರಾಸಿಕ್ಯೂಷನ್) ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ; ಅಥವಾ ಅಭಿಯೋಗ ಉಪ ನಿರ್ದೇಶಕರ ಮತ್ತು ಇತರ ವೃಂದಗಳ ಹುದ್ದೆಯನ್ನು, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) ಅಡಿಯಲ್ಲಿ ರಚಿಸಲಾದ ವೃಂದ (ಕೇಡರ್) ಮತ್ತು ನೇಮಕಾತಿ ನಿಯಮಗಳ ಅನ್ವಯ ತುಂಬತಕ್ಕದ್ದು."

(ಬಿ) (5)ನೇ ಉಪ ಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ :–

"(5) ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ ಅಡಿಯಲ್ಲಿ ಸರ್ಕಾರವು ರಚಿಸಿರುವ ನೇಮಕಾತಿ ನಿಯಮಗಳಡಿಯಲ್ಲಿ ನೇಮಕಾತಿ ಮಾಡಲಾದ ಅಭಿಯೋಜಕರುಗಳ ವೃಂದದಿಂದ ರಾಜ್ಯ ಸರ್ಕಾರವು ನೇಮಕ ಮಾಡಿದ ಪ್ರತಿಯೊಬ್ಬ ಸರ್ಕಾರಿ ಅಭಿಯೋಜಕನು, ಹೆಚ್ಚುವರಿ ಸರ್ಕಾರಿ ಅಭಿಯೋಜಕನು, ಅಭಿಯೋಜನೆ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರಿಗೆ ಅಧೀನನಾಗಿರತಕ್ಕದ್ದು ಹಾಗೂ 24ನೇ ಪ್ರಕರಣದ (8)ನೇ ಉಪ ಪ್ರಕರಣದಡಿಯಲ್ಲಿ ನೇಮಕ ಮಾಡಲಾದ ಪ್ರತಿಯೊಬ್ಬ ಸರ್ಕಾರಿ ಅಭಿಯೋಜಕ, ಅಧಿಕ ಅಭಿಯೋಜಕ, ಮತ್ತು ವಿಶೇಷ ಅಭಿಯೋಜಕ ಇವರು ಅಡ್ವೋಕೇಟ್ ಜನರಲ್‌ರವರ ಅಧೀನರಾಗಿರತಕ್ಕದ್ದು."

(ಸಿ) (6)ನೇ ಉಪ ಪ್ರಕರಣದಲ್ಲಿ, "ಅಭಿಯೋಗ ಉಪ ನಿರ್ದೇಶಕರು" ಎಂಬ ಪದಗಳಿಗೆ "ಅಭಿಯೋಗ ನಿರ್ದೇಶಕರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ದಂಡ ಪ್ರಕ್ರಿಯಾ ಸಂಹಿತೆ, 1973ನ್ನು ದಂಡ ಪ್ರಕ್ರಿಯಾ ಸಂಹಿತೆ (ತಿದ್ದುಪಡಿ) ಅಧಿನಿಯಮ, 2005ರ (2005ರ ಕೇಂದ್ರ ಅಧಿನಿಯಮ 25) ಮೂಲಕ ತಿದ್ದುಪಡಿ ಮಾಡಲಾಗಿದೆ. ಸದರಿ ತಿದ್ದುಪಡಿಯು 2006ರ ಜೂನ್ 23 ರಿಂದ ಜಾರಿಗೆ ಬಂದಿದೆ.

ಸದರಿ ತಿದ್ದುಪಡಿಯ ಮೂಲಕ 25ಎ ಎಂಬ ಒಂದು ಹೊಸ ಪ್ರಕರಣವನ್ನು ಸೇರಿಸಲಾಗಿದ್ದು, ಅದಕ್ಕೆ ಅನುಸಾರವಾಗಿ, ಅಭಿಯೋಗ ನಿರ್ದೇಶಕರು ಮತ್ತು ಸೂಕ್ತವಾಗಬಹುದಾದಷ್ಟು ಸಂಖ್ಯೆಯಲ್ಲಿ ಅಭಿಯೋಗ ಉಪನಿರ್ದೇಶಕರನ್ನೊಳಗೊಂಡ ಅಭಿಯೋಗ ನಿರ್ದೇಶನಾಲಯವನ್ನು ಸ್ಥಾಪಿಸಬಹುದು. ಮತ್ತು ಸದರಿ ಪ್ರಕರಣದ (2)ನೇ ಉಪ ಪ್ರಕರಣಕ್ಕೆ ಅನುಸಾರವಾಗಿ, ಹತ್ತು ವರ್ಷಗಳ ಅವಧಿಗೆ ಕಡಿಮೆಯಲ್ಲದಂತೆ ನ್ಯಾಯವಾದಿ ವೃತ್ತಿಯನ್ನು ನಡೆಸಿದ ವ್ಯಕ್ತಿಯು ಮಾತ್ರವೇ ಅಭಿಯೋಗ ನಿರ್ದೇಶಕರಾಗಿ ಅಥವಾ ಅಭಿಯೋಗ ಉಪನಿರ್ದೇಶಕರಾಗಿ ನೇಮಕರಾಗಲು ಅರ್ಹರಾಗಿರುತ್ತಾರೆ ಮತ್ತು ಅಂಥ ನೇಮಕವನ್ನು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರ ಸಹಮತಿಯೊಂದಿಗೆ ಮಾಡತಕ್ಕದ್ದು.

14ನೇ ಕಾನೂನು ಆಯೋಗದ ಶಿಫಾರಸ್ಸುಗಳ ಆಧಾರದ ಮೇಲೆ 1972ರಲ್ಲಿ ಕರ್ನಾಟಕ ರಾಜ್ಯದಲ್ಲಿ ಒಂದು ಅಭಿಯೋಗ ನಿರ್ದೇಶನಾಲಯವನ್ನು ಸ್ಥಾಪಿಸಲಾಗಿದ್ದು, ಅದು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿದೆ. ದಂಡ ಪ್ರಕ್ರಿಯಾ ಸಂಹಿತೆ, 1973ರ 24ನೇ ಪ್ರಕರಣದ (6)ನೇ ಉಪ ಪ್ರಕರಣಕ್ಕೆ ಅನುಸಾರವಾಗಿ ಅಭಿಯೋಜನೆ ನಡೆಸುವ ಅಧಿಕಾರಿಗಳ ನಿಯತ ವೃಂದಗಳು ಕರ್ನಾಟಕ ರಾಜ್ಯದಲ್ಲಿ ಅಸ್ತಿತ್ವದಲ್ಲಿರುವುದರಿಂದ, ಕರ್ನಾಟಕ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) ಅಡಿಯಲ್ಲಿ ರಚಿಸಲಾದ ನೇಮಕಾತಿ ನಿಯಮಗಳ ಉಪಬಂಧಗಳಿಗನುಸಾರ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪ ನಿರ್ದೇಶಕರು ಮತ್ತು ಅಂಥ ಇತರ ಅಭಿಯೋಜಕರನ್ನು ನೇಮಕ ಮಾಡಲು ಸರ್ಕಾರಕ್ಕೆ ಸಾಧ್ಯವಾಗುವಂತೆ ಕರ್ನಾಟಕ ರಾಜ್ಯಕ್ಕೆ ಅದನ್ನು ಅನ್ವಯಿಸುವಲ್ಲಿ ದಂಡ ಪ್ರಕ್ರಿಯಾ ಸಂಹಿತೆಯು 25ಎ ಪ್ರಕರಣದ (2)ನೇ ಉಪ ಪ್ರಕರಣ, (5)ನೇ ಉಪ ಪ್ರಕರಣ ಮತ್ತು (6)ನೇ ಉಪ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮದಿಂದಾಗಿ ಯಾವುದೇ ಹೆಚ್ಚಿನ ವೆಚ್ಚವುಂಟಾಗುವುದಿಲ್ಲ.

**ಡಾ॥ ವಿ.ಎಸ್. ಆಚಾರ್ಯ**
ಗೃಹ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ದಂಡ ಪ್ರಕ್ರಿಯಾ ಸಂಹಿತೆ, 1973ರ ಉದ್ಧೃತ ಭಾಗ**

xx xx xx

**25ಎ ಅಭಿಯೋಗ ನಿರ್ದೇಶನಾಲಯ.–** xx

xx xx xx

(2) ಹತ್ತು ವರ್ಷಗಳ ಅವಧಿಗೆ ಕಡಿಮೆಯಲ್ಲದಂತೆ ನ್ಯಾಯವಾದಿ ವೃತ್ತಿಯನ್ನು ನಡೆಸಿದ ವ್ಯಕ್ತಿಯು ಮಾತ್ರವೇ ಅಭಿಯೋಗ ನಿರ್ದೇಶಕರಾಗಿ ಅಥವಾ ಅಭಿಯೋಗ ಉಪನಿರ್ದೇಶಕರಾಗಿ ನೇಮಕವಾಗಲು ಅರ್ಹರಾಗಿರುತ್ತಾರೆ ಮತ್ತು ಅಂಥ ನೇಮಕಾತಿಯನ್ನು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರ ಸಹಮತಿಯೊಂದಿಗೆ ಮಾಡತಕ್ಕದ್ದು.

xx xx xx

(5) 24ನೇ ಪ್ರಕರಣದ (1)ನೇ ಉಪ ಪ್ರಕರಣದಡಿಯಲ್ಲಿ ಅಥವಾ ಸಂದರ್ಭಾನುಸಾರ (8)ನೇ ಉಪ ಪ್ರಕರಣದಡಿಯಲ್ಲಿ ಉಚ್ಚ ನ್ಯಾಯಾಲಯದಲ್ಲಿ ಮೊಕದ್ದಮೆಗಳನ್ನು ನಡೆಸಲು ರಾಜ್ಯ ಸರ್ಕಾರವು ನೇಮಿಸುವ ಪ್ರತಿಯೊಬ್ಬ ಸರ್ಕಾರಿ ಅಭಿಯೋಜಕ, ಅಧಿಕ ಸರ್ಕಾರಿ ಅಭಿಯೋಜಕ ಮತ್ತು ವಿಶೇಷ ಸರ್ಕಾರಿ ಅಭಿಯೋಜಕ ಇವರುಗಳು, ಅಭಿಯೋಗ ನಿರ್ದೇಶಕರ ಅಧೀನನಾಗಿರತಕ್ಕದ್ದು.

(6) 24ನೇ ಪ್ರಕರಣದ (1)ನೇ ಉಪ ಪ್ರಕರಣದಡಿಯಲ್ಲಿ ಅಥವಾ ಸಂದರ್ಭಾನುಸಾರ (8)ನೇ ಉಪ ಪ್ರಕರಣದಡಿಯಲ್ಲಿ ಜಿಲ್ಲಾ ನ್ಯಾಯಾಲಯಗಳಲ್ಲಿ ಮೊಕದ್ದಮೆಗಳನ್ನು ನಡೆಸಲು ರಾಜ್ಯ ಸರ್ಕಾರವು ನೇಮಿಸುವ ಪ್ರತಿಯೊಬ್ಬ ಸರ್ಕಾರಿ ಅಭಿಯೋಜಕ, ಅಧಿಕ ಸರ್ಕಾರಿ ಅಭಿಯೋಜಕ ಇವರುಗಳು ಮತ್ತು ವಿಶೇಷ ಸರ್ಕಾರಿ ಅಭಿಯೋಜಕ ಹಾಗೂ 25ನೇ ಪ್ರಕರಣದ (1)ನೇ ಉಪ ಪ್ರಕರಣದಡಿಯಲ್ಲಿ ನೇಮಿಸಲಾದ ಪ್ರತಿಯೊಬ್ಬ ಸಹಾಯಕ ಸರ್ಕಾರಿ ಅಭಿಯೋಜಕ ಇವರು, ಅಭಿಯೋಗ ಉಪನಿರ್ದೇಶಕರ ಅಧೀನನಾಗಿರತಕ್ಕದ್ದು.

xx xx xx

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**FIFTH SESSION**

## THE CODE OF CRIMINAL PROCEDURE (KARNATAKA AMENDMENT) BILL, 2009
## (L.A. Bill No. 40 of 2009)

A Bill further to amend the Code of Criminal Procedure, 1973 in its application to the State of Karnataka

Whereas, it is expedient further to amend the Code of Criminal Procedure, 1973 (Central Act No. 2 of 1974) for the purposes hereinafter appearing;

Be it enacted by the Karnataka State Legislature in the Sixtieth year of the Republic of India as follows:-

**1. Short title and Commencement.-** (1) This Act may be called the Code of Criminal Procedure (Karnataka Amendment) Act, 2009.

(2) It shall come into force at once.

**2. Amendment of Section 25A.-** In section 25A of the Code of Criminal Procedure, 1973 (Central Act No. 2 of 1974),-

(a) for sub-section (2), the following shall be substituted, namely :-

"(2) The post of Director of prosecution and Government litigations, or a Deputy Director of Prosecution and other cadres shall be filled in accordance with the Cadre and Recruitment Rules framed under the Karnataka State Civil Services Act, 1978 (Karnataka Act 14 of 1990)."

(b) for sub-section (5), the following shall be substituted, namely :-

"(5) Every Public Prosecutor, Additional Public Prosecutor appointed by the State Government from the cadre of Prosecutors recruited under the recruitment rules framed by the Government under the Karnataka State Civil Services Act, 1978 shall be subordinate to the Director of Prosecution and Government litigations and every Public Prosecutor, Additional Prosecutor and Special Prosecutor appointed under sub-section (8) of section 24 shall be subordinate to the Advocate General."

(c) in sub-section (6), for the words "Deputy Director of Prosecution" the words "Director of Prosecution" shall be substituted.

### STATEMENT OF OBJECTS AND REASONS

The Code of Criminal Procedure, 1973 was amended by the Code of Criminal procedure (Amendment) Act, 2005 (Central Act 25 of 2005). The said amendment has come into force from 23rd June 2006.

A new section 25A has been inserted through the said amendment according to which, there may be established a Directorate of Prosecution consisting of Director of Prosecution and as many Deputy Directors of Prosecution as it thinks fit. Further, according to sub-section (2) of the said section a person shall be eligible to be appointed as a Director of Prosecution or a Deputy Director of Prosecution, only if he has been in practice as an advocate for not less than ten years and such appointment shall be made with the concurrence of the Chief Justice of the High Court.

Based on the recommendations of the 14th Law Commission a Directorate of Prosecution has been established in the State of Karnataka in 1972, which is working effectively. Since a regular cadre of prosecuting officers in terms of sub-section (6) of section 24 of the Code of Criminal Procedure, 1973 exists in the State of Karnataka, it is considered necessary to amend sub-section (2), sub-section (5) and sub-section (6) of section 25A of the Code of Criminal Procedure in its application to the State of Karnataka so as to enable the Government to appoint the Director of Prosecution, Deputy Director of Prosecution and such other Prosecutors in accordance with the provisions of the recruitment rules framed under the Karnataka Civil Services Act, 1978 (Karnataka Act 14 of 1990).

Hence the Bill.

**FINANCIAL MEMORANDUM**

There is no extra expenditure involved in the proposed measure.

**Dr. V.S. ACHARYA**
Minister for Home

**S.B. PATIL**
Secretary
Karnataka Legislative Assembly

**EXTRACT FROM THE CODE OF CRIMINAL PROCEDURE 1973**

**Section 25A Directorate of Prosecution.-** xx

xx xx xx

(2) A person shall be eligible to be appointed as a Director of Prosecution or a Deputy Director of Prosecution, only if he has been in practice as an advocate for not less than ten years and such appointment shall be made with the concurrence of the Chief Justice of the High Court.

xx xx xx

(5) Every Public Prosecutor, Additional Public Prosecutor and Special Public Prosecutor appointed by the State Government under sub-section (1), or as the case may be, sub-section (8), of section 24 to conduct cases in the High Court shall be subordinate to the Director of Prosecution.

(6) Every Public Prosecutor, Additional Public Prosecutor and Special Public Prosecutor appointed by the State Government under sub-section (3), or as the case may be, sub-section (8), of section 24 to conduct cases in District Courts and every Assistant Public Prosecutor appointed under sub-section (1) of section 25 shall be subordinate to the Deputy Director of Prosecution.

xx xx xx

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೧, ೨೦೧೦ (ಫಾಲ್ಗುಣ ೧೦, ಶಕ ವರ್ಷ ೧೯೩೧) | ನಂ. ೨೧೦ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/305/Bill/2009, Bangalore, Dated : 1st March, 2010**

The following Bill was introduced in Legislative Assembly on 1st March, 2010

**THE KARNATAKA EXCISE (AMENDMENT) BILL, 2009**
**(L.A. BILL No. 41 OF 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಐದನೇ ಅಧಿವೇಶನ**

**ಕರ್ನಾಟಕ ಅಬಕಾರಿ (ತಿದ್ದುಪಡಿ) ವಿಧೇಯಕ, 2009**
**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 41)**

ಕರ್ನಾಟಕ ಅಬಕಾರಿ ಅಧಿನಿಯಮ, 1965ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಅಬಕಾರಿ ಅಧಿನಿಯಮ, 1965ನ್ನು (1966ರ ಕರ್ನಾಟಕ ಅಧಿನಿಯಮ 21) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ :–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು **ಕರ್ನಾಟಕ ಅಬಕಾರಿ (ತಿದ್ದುಪಡಿ) ಅಧಿನಿಯಮ, 2009** ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 67ನೇ ಪಕರಣದ ತಿದ್ದುಪಡಿ.–** ಕರ್ನಾಟಕ ಅಬಕಾರಿ ಅಧಿನಿಯಮ, 1965ರ (1996ರ ಕರ್ನಾಟಕ ಅಧಿನಿಯಮ 21) 67ನೇ ಪ್ರಕರಣದ (ಎ) ಖಂಡದಲ್ಲಿ (i)ನೇ ಉಪಖಂಡಕ್ಕೆ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ :–

> "(i) ಕೇಂದ್ರದ (ಅರೆಸೈನಿಕ ಘಟಕಗಳೂ ಒಳಗೊಂಡಂತೆ) ಸಶಸ್ತ್ರ ಬಲಗಳ ಸದಸ್ಯರುಗಳ ಮತ್ತು ರಾಜತಾಂತ್ರಿಕ ಪ್ರತಿನಿಧಿಗಳ ಉಪಯೋಗಕ್ಕಾಗಿ ಅಥವಾ ಸೇವನೆಗಾಗಿ ;"

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಪ್ರಸ್ತುತ ಕರ್ನಾಟಕ ಅಬಕಾರಿ ಅಧಿನಿಯಮ, 1965ರ 67ನೇ ಪ್ರಕರಣದಡಿಯಲ್ಲಿ ರಾಜ್ಯ ಸರ್ಕಾರಕ್ಕೆ, ಕೆಲವು ಸಂಸ್ಥೆಗಳ ಪ್ರವರ್ಗಗಳಿಗೆ ಮಾರಾಟ ಮಾಡಲಾದ ಯಾವುದೇ ಮದ್ಯದ ಸಂಬಂಧದಲ್ಲಿ 22ನೇ ಪ್ರಕರಣದಡಿಯಲ್ಲಿ ಸಂದಾಯ ಮಾಡತಕ್ಕ ಅಬಕಾರಿ ಬಾಕಿಗಳಿಗೆ ಉತ್ತರಾನ್ವಯವಾಗಿ ಅಥವಾ ಪೂರ್ವಾನ್ವಯವಾಗಿ ವಿನಾಯಿತಿ ನೀಡುವುದಕ್ಕೆ ಅಥವಾ ಅವನ್ನು ಕಡಿಮೆ ಮಾಡುವುದಕ್ಕೆ ಅಧಿಕಾರ ನೀಡಲಾಗಿದೆ.

ಇತ್ತೀಚೆಗೆ, ರಾಜ್ಯದ ರಾಜಧಾನಿಯಲ್ಲಿ ಕಾನ್ಸಲ್ ಕಚೇರಿಗಳು / ರಾಜತಾಂತ್ರಿಕ ಪ್ರತಿನಿಧಿಗಳ ಕಚೇರಿಗಳು ಹೆಚ್ಚಿನ ಸಂಖ್ಯೆಯಲ್ಲಿ ಕಾರ್ಯಾರಂಭ ಮಾಡಿವೆ. ಬೆಂಗಳೂರಿನಲ್ಲಿ ಜರ್ಮನಿ, ಜಪಾನ್, ಫ್ರಾನ್ಸ್, ಬ್ರಿಟನ್, ಸ್ವಿಟ್ಜರ್‌ಲ್ಯಾಂಡ್, ಐರ್‌ಲೆಂಡ್, ಮಾಲ್ಡಿವ್ಸ್, ಫಿನ್‌ಲ್ಯಾಂಡ್ ಮತ್ತು ಸ್ಪೈನ್‌ನ ಕಾನ್ಸಲ್ ಕಚೇರಿಗಳು ಸ್ಥಾಪನೆಯಾಗಿವೆ. ಘನತೆವೆತ್ತ ರಾಜತಾಂತ್ರಿಕರಿಗೆ ಗೌರವಾರ್ಪಣೆಯಾಗಿ ಮದ್ಯದ ಮೇಲಿನ ತೆರಿಗೆ ವಿನಾಯಿತಿಯನ್ನು ನೀಡುವ ಸದವಕಾಶ ರಾಜ್ಯ ಸರ್ಕಾರಕ್ಕೆ ದೊರಕಿದೆ.

ಆದ್ದರಿಂದ, 'ರಾಜತಾಂತ್ರಿಕ ಪ್ರತಿನಿಧಿಗಳಿಗೆ' ಮಾರಾಟ ಮಾಡಲಾದ ಮದ್ಯದ ಮೇಲೆ ತೆರಿಗೆ ವಿನಾಯಿತಿ ನೀಡುವುದನ್ನು ಸಾಧ್ಯಗೊಳಿಸುವ ಉಪಬಂಧವನ್ನು ಸೇರಿಸಿ ಕರ್ನಾಟಕ ಅಬಕಾರಿ ಅಧಿನಿಯಮ, 1965ರ 67(1)(i)ನೇ ಪ್ರಕರಣಕ್ಕೆ ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ ವಾರ್ಷಿಕವಾಗಿ ಅಂದಾಜು 48,33,000/– ರೂಪಾಯಿಗಳ ಆರ್ಥಿಕ ತೊಡಕುಂಟಾಗುತ್ತದೆ.

**ಎಂ.ಪಿ. ರೇಣುಕಾಚಾರ್ಯ**
ಅಬಕಾರಿ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ

## ಅನುಬಂಧ

**ಕರ್ನಾಟಕ ಅಬಕಾರಿ ಅಧಿನಿಯಮ, 1965 (1966ರ ಕರ್ನಾಟಕ ಅಧಿನಿಯಮ 21)**

xx xx xx

**1. ವಿನಾಯಿತಿ, ಇತ್ಯಾದಿಗೆ ರಾಜ್ಯ ಸರ್ಕಾರದ ಅಧಿಕಾರ.–** xx xx xx

(i) ಕೇಂದ್ರದ (ಅರೆಸೈನಿಕ ಘಟಕಗಳೂ ಒಳಗೊಂಡಂತೆ) ಸಶಸ್ತ್ರ ಬಲಗಳ ಸದಸ್ಯರುಗಳ ಉಪಯೋಗಕ್ಕಾಗಿ ಅಥವಾ ಸೇವನೆಗಾಗಿ ;

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**FIFTH SESSION**

## THE KARNATAKA EXCISE (AMENDMENT) BILL, 2009

**(L.A. Bill No. 41 of 2009)**

A Bill further to amend the Karnataka Excise Act, 1965.

Whereas, it is expedient further to amend the Karnataka Excise Act, 1965 (Karnataka Act 21 of 1966) for the purposes hereinafter appearing ;

Be it enacted by the Karnataka State Legislature in the Sixtieth year of the Republic of India as follows:-

**1. Short title and Commencement.-** (1) This Act may be called the Karnataka Excise (Amendment) Act, 2009.

(2) It shall come into force at once.

**2. Amendment of Section 67.-** In Karnataka Excise Act, 1965 (Karnataka Act 21 of 1966), in section 67, in clause (a), for sub-clause (i), the following shall be substituted, namely.-

"(i) for use or consumption by the members of the Armed Forces (including Para-Military units) of the Union and Diplomatic agents;"

**STATEMENT OF OBJECTS AND REASONS**

At present under Section 67 of the Karnataka Excise Act, 1965, the State Government is empowered to exempt or reduce either prospectively or retrospectively the excise dues payable under Section 22 of any liquor sold to certain categories of institutions.

Of late, more number of consulates / diplomatic agents has started functioning in the State Headquarters. The offices of Consulates of Germany, Japan, France, Britain, Switzerland, Ireland, Maldives, Finland and Spain are established in Bangalore. It is the privilege of the State Government to extend benefit of exemption of tax on liquor to the diplomats as a matter of honouring their dignity.

Therefore, it is proposed to amend Section 67(1)(i) of the Karnataka Excise Act, 1965 with an enabling provision to extend the benefit of exemption of tax on liquor to 'diplomatic agents'.

Hence the Bill.

**FINANCIAL MEMORANDUM**

There will be an approximate financial implication of Rs. 48,33,000 per annum by the proposed legislative measure.

**M.P. RENUKACHARYA**
Minister for Excise

**S.B. PATIL**
Secretary
Karnataka Legislative Assembly

**ANNEXURE**

**Extract from the Karnataka Excise Act, 1965**

**(Karnataka Act 21 of 1966)**

xx xx xx

**1. Power of State Government to exempt, etc.-** (a) xx xx xx

(i) for use or Consumption by the members of the Armed Forces (including Para-military units) of the Union ;

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಮಾರ್ಚ್ ೧, ೨೦೧೦ (ಫಾಲ್ಗುಣ ೧೦, ಶಕ ವರ್ಷ ೧೯೩೧) | ನಂ. ೨೧೧ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/316/Bill/2009, Bangalore, Dated : 1st March, 2010**

The following Bill was introduced in Legislative Assembly on 1st March, 2010.

# THE KARNATAKA TOWN AND COUNTRY PLANNING AND CERTAIN OTHER LAWS (AMENDMENT) BILL, 2009

**(L.A. Bill No. 43 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಐದನೇ ಅಧಿವೇಶನ**

## ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ವಿಧೇಯಕ, 2009

**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 43)**

ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961, ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 ಮತ್ತು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964 – ಇವುಗಳನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961 (1963ರ ಕರ್ನಾಟಕ ಅಧಿನಿಯಮ 11), ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14) ಮತ್ತು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 22) – ಇವುಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ 2009 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 1963ರ ಕರ್ನಾಟಕ ಅಧಿನಿಯಮ 11ರ ತಿದ್ದುಪಡಿ.–** ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ (1963ರ ಕರ್ನಾಟಕ ಅಧಿನಿಯಮ 11) 76ಎಫ್ಎಫ್ ಪ್ರಕರಣದಲ್ಲಿ,–

(1) (1)ನೇ ಉಪ ಪ್ರಕರಣದಲ್ಲಿ, "ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2004ರ ಪ್ರಾರಂಭದ ದಿನಾಂಕಕ್ಕೆ" ಎಂಬ ಪದಗಳು, ಆವರಣ ಚಿಹ್ನೆಗಳು ಮತ್ತು ಅಂಕಿಗಳಿಗೆ "2009ರ ಡಿಸೆಂಬರ್ 3ನೇ ದಿನಾಂಕಕ್ಕೆ" ಎಂಬ ಅಂಕಿಗಳು ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(2) (1)ನೇ ಉಪ ಪ್ರಕರಣದ ತರುವಾಯ, ಈ ಮುಂದಿನ ಉಪಬಂಧಗಳನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು ಹಾಗೆ ನಿಯಮಿಸಲಾದ ಮೊಬಲಗು,–

(i) ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿರುವ ಕಟ್ಟಡ ಭಾಗದ ಸಂಬಂಧದಲ್ಲಿ, ಕಟ್ಟಡದ ಸುತ್ತ ಬಿಡಬೇಕಾದ ಖಾಲಿ ಜಾಗದ ಮಾನಕಗಳನ್ನು ಮತ್ತು ಅನುಮತಿಸಬಹುದಾದ ಫ್ಲೋರ್ ಏರಿಯಾದ ಅನುಪಾತದ ಅಂಥ ಉಲ್ಲಂಘನೆಯು, ಶೇಕಡಾ ಇಪ್ಪತ್ತೈದರಷ್ಟನ್ನು ಮೀರದಿದ್ದರೆ, ಕರ್ನಾಟಕ ಸ್ಟಾಂಪು ಅಧಿನಿಯಮ, 1957 ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾದಂತೆ ಮಾರುಕಟ್ಟೆ ಮೌಲ್ಯದ ಶೇಕಡಾ ಆರರಷ್ಟಕ್ಕಿಂತ ಕಡಿಮೆ ಇರತಕ್ಕದ್ದಲ್ಲ;

(ii) ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿರುವ ಕಟ್ಟಡ ಭಾಗದ ಸಂಬಂಧದಲ್ಲಿ, ಕಟ್ಟಡದ ಸುತ್ತ ಬಿಡಬೇಕಾದ ಖಾಲಿ ಜಾಗದ ಮಾನಕಗಳನ್ನು ಮತ್ತು ಅನುಮತಿಸಬಹುದಾದ ಫ್ಲೋರ್ ಏರಿಯಾದ ಅನುಪಾತದ ಅಂಥ ಉಲ್ಲಂಘನೆಯು, ಶೇಕಡಾ ಇಪ್ಪತ್ತೈದನ್ನು ಮೀರಿದ್ದು, ಆದರೆ ಶೇಕಡಾ ಐವತ್ತರಷ್ಟನ್ನು ಮೀರದಿದ್ದರೆ, ಕರ್ನಾಟಕ ಸ್ಟಾಂಪು ಅಧಿನಿಯಮ, 1957 ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾದಂತೆ ಮಾರುಕಟ್ಟೆ ಮೌಲ್ಯದ ಶೇಕಡಾ ಎಂಟರಷ್ಟಕ್ಕಿಂತ ಕಡಿಮೆ ಇರತಕ್ಕದ್ದಲ್ಲ;

ಮತ್ತೂ ಪರಂತು ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ಕಟ್ಟಡದ ಭಾಗವನ್ನು ಬಳಸಲಾಗುತ್ತಿದ್ದರೆ ಅಥವಾ ನಿವಾಸೇತರ ಉದ್ದೇಶಕ್ಕಾಗಿದ್ದರೆ, ಅಂಥ ಭಾಗದ ಸಕ್ರಮಕ್ಕಾಗಿ ಸಂದಾಯ ಮಾಡಬೇಕಾದ ಮೊಬಲಗು,–

(ಎ) ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿರುವ ಕಟ್ಟಡ ಭಾಗದ ಸಂಬಂಧದಲ್ಲಿ, ಕಟ್ಟಡದ ಸುತ್ತ ಬಿಡಬೇಕಾದ ಖಾಲಿ ಜಾಗದ ಮಾನಕಗಳನ್ನು ಮತ್ತು ಅನುಮತಿಸಬಹುದಾದ ಫ್ಲೋರ್ ಏರಿಯಾದ ಅನುಪಾತದ ಅಂಥ ಉಲ್ಲಂಘನೆಯು, ಶೇಕಡಾ ಹನ್ನೆರಡೂವರೆಯಷ್ಟನ್ನು ಮೀರದಿದ್ದರೆ, ಕರ್ನಾಟಕ ಸ್ಟಾಂಪು ಅಧಿನಿಯಮ, 1957 ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾದಂತೆ ಮಾರುಕಟ್ಟೆ ಮೌಲ್ಯದ ಶೇಕಡ ಇಪ್ಪತ್ತರಷ್ಟು ಆಗಿರತಕ್ಕದ್ದು;

(ಬಿ) ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿರುವ ಕಟ್ಟಡ ಭಾಗದ ಸಂಬಂಧದಲ್ಲಿ, ಕಟ್ಟಡದ ಸುತ್ತ ಬಿಡಬೇಕಾದ ಖಾಲಿ ಜಾಗದ ಮಾನಕಗಳನ್ನು ಮತ್ತು ಅನುಮತಿಸಬಹುದಾದ ಫ್ಲೋರ್ ಏರಿಯಾದ ಅನುಪಾತದ ಅಂಥ ಉಲ್ಲಂಘನೆಯು, ಶೇಕಡಾ ಹನ್ನೆರಡೂವರೆಯಷ್ಟನ್ನು ಮೀರಿದ್ದು ಆದರೆ ಶೇಕಡಾ ಇಪ್ಪತ್ತೈದರಷ್ಟನ್ನು ಮೀರದಿದ್ದರೆ, ಕರ್ನಾಟಕ ಸ್ಟಾಂಪು ಅಧಿನಿಯಮ, 1957 ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾದಂತೆ ಮಾರುಕಟ್ಟೆ ಮೌಲ್ಯದ ಶೇಕಡ ಮೂವತ್ತೈದರಷ್ಟು ಆಗಿರತಕ್ಕದ್ದು;"

(3) (13)ನೇ ಉಪ ಪ್ರಕರಣಕ್ಕೆ ಈ ಮುಂದಿನ ಉಪ ಪ್ರಕರಣವನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(13) ಈ ಪ್ರಕರಣದ ಮೇರೆಗೆ ಸಕ್ರಮಕ್ಕಾಗಿ ಕೋರುವ ಯಾವೊಬ್ಬ ವ್ಯಕ್ತಿಯು, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2009 ಪ್ರಾರಂಭವಾದ ದಿನಾಂಕದಿಂದ ಒಂದು ವರ್ಷದೊಳಗೆ ನಿಯಮಿಸಬಹುದಾದ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸತಕ್ಕದ್ದು."

**3. 1977ರ ಕರ್ನಾಟಕ ಅಧಿನಿಯಮ 14ರ ತಿದ್ದುಪಡಿ.–** ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ 14) 321–ಎ ಪ್ರಕರಣದಲ್ಲಿ,–

(1) (1)ನೇ ಉಪ ಪ್ರಕರಣದಲ್ಲಿ, "ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2004ರ ಪ್ರಾರಂಭದ ದಿನಾಂಕಕ್ಕೆ" ಎಂಬ ಪದಗಳು, ಆವರಣ ಚಿಹ್ನೆಗಳು ಮತ್ತು ಅಂಕಿಗಳಿಗೆ "2009ರ ಡಿಸೆಂಬರ್ 3ನೇ ದಿನಾಂಕಕ್ಕೆ" ಎಂಬ ಅಂಕಿಗಳು ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(2) (2)ನೇ ಉಪ ಪ್ರಕರಣದಲ್ಲಿ,–

(i) ಮೊದಲನೇ ಪರಂತುಕದಲ್ಲಿ,–

(ಎ) (i)ನೇ ಖಂಡದಲ್ಲಿ "ಹತ್ತಕ್ಕಿಂತ" ಎಂಬ ಪದಕ್ಕೆ "ಆರಕ್ಕಿಂತ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ಬಿ) (ii)ನೇ ಖಂಡದಲ್ಲಿ "ಇಪ್ಪತ್ತೈದರಷ್ಟಕ್ಕಿಂತ" ಎಂಬ ಪದಕ್ಕೆ "ಎಂಟರಷ್ಟಕ್ಕಿಂತ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ii) ಎರಡನೇ ಪರಂತುಕದಲ್ಲಿ,–

(ಎ) (ಎ) ಖಂಡದಲ್ಲಿ "ಇಪ್ಪತ್ತೈದರಷ್ಟು" ಎಂಬ ಪದಕ್ಕೆ "ಇಪ್ಪತ್ತರಷ್ಟು" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ಬಿ) (ಬಿ) ಖಂಡದಲ್ಲಿ "ನಲವತ್ತರಷ್ಟು" ಎಂಬ ಪದಕ್ಕೆ "ಮೂವತ್ತೈದರಷ್ಟು" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು;

**4. 1964ರ ಕರ್ನಾಟಕ ಅಧಿನಿಯಮ 22ರ ತಿದ್ದುಪಡಿ.–** ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 22) 187–ಎ ಪ್ರಕರಣದಲ್ಲಿ,–

(1) (1)ನೇ ಉಪ ಪ್ರಕರಣದಲ್ಲಿ, "ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2004ರ ಪ್ರಾರಂಭದ ದಿನಾಂಕಕ್ಕೆ" ಎಂಬ ಪದಗಳು, ಆವರಣ ಚಿಹ್ನೆಗಳು ಮತ್ತು ಅಂಕಿಗಳಿಗೆ "2009ರ ಡಿಸೆಂಬರ್ 3ನೇ ದಿನಾಂಕಕ್ಕೆ" ಎಂಬ ಅಂಕಿಗಳು ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(2) (2)ನೇ ಉಪ ಪ್ರಕರಣದಲ್ಲಿ,–

(i) ಮೊದಲನೇ ಪರಂತುಕದಲ್ಲಿ,–

(ಎ) (i)ನೇ ಖಂಡದಲ್ಲಿ "ಹತ್ತಕ್ಕಿಂತ" ಎಂಬ ಪದಕ್ಕೆ "ಆರಕ್ಕಿಂತ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ಬಿ) (ii)ನೇ ಖಂಡದಲ್ಲಿ "ಇಪ್ಪತ್ತೈದರಷ್ಟಕ್ಕಿಂತ" ಎಂಬ ಪದಕ್ಕೆ "ಎಂಟರಷ್ಟಕ್ಕಿಂತ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ii) ಎರಡನೇ ಪರಂತುಕದಲ್ಲಿ,-

(ಎ) (ಎ) ಖಂಡದಲ್ಲಿ "ಇಪ್ಪತ್ತೈದರಷ್ಟು" ಎಂಬ ಪದಕ್ಕೆ "ಇಪ್ಪತ್ತರಷ್ಟು" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ಬಿ) (ಬಿ) ಖಂಡದಲ್ಲಿ "ನಲವತ್ತರಷ್ಟು" ಎಂಬ ಪದಕ್ಕೆ "ಮೂವತ್ತೈದರಷ್ಟು" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು;

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಈ ಮುಂದಿನವುಗಳಿಗೆ ಉಪಬಂಧಗಳನ್ನು ಕಲ್ಪಿಸುವುದಕ್ಕಾಗಿ ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961 (1963ರ ಕರ್ನಾಟಕ ಅಧಿನಿಯಮ 11), ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14) ಮತ್ತು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 22) – ಇವುಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ, ಎಂದರೆ:-

(ಎ) ಸಕ್ರಮಗೊಳಿಸುವುದಕ್ಕಾಗಿ ಅರ್ಜಿಯನ್ನು ಸಲ್ಲಿಸಲು ಈ ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ವರ್ಷ ಕಾಲಮಿತಿಯನ್ನು ವಿಸ್ತರಿಸುವುದು.

(ಬಿ) 2009ರ ಡಿಸೆಂಬರ್ 3ನೇ ದಿನಾಂಕಕ್ಕೆ ಮೊದಲು ಕಾನೂನು ಉಪಬಂಧಗಳನ್ನು ಮತ್ತು ಕಟ್ಟಡ ಉಪವಿಧಿಗಳನ್ನು ಉಲ್ಲಂಘಿಸಿ ನಿರ್ಮಿಸಿದ ಕಟ್ಟಡಗಳನ್ನು ಸಕ್ರಮಗೊಳಿಸುವುದು, ಮತ್ತು

(ಸಿ) ಅಂಥ ಕಟ್ಟಡಗಳನ್ನು ಸಕ್ರಮಗೊಳಿಸುವುದಕ್ಕಾಗಿನ ಶುಲ್ಕ/ಮೊಬಲಗನ್ನು ಕಡಿಮೆ ಮಾಡುವುದು.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯ ಮಂತ್ರಿಗಳು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ (1963ರ ಕರ್ನಾಟಕ ಅಧಿನಿಯಮ 11) ಉದ್ಧೃತ ಭಾಗ

**xx xx xx**

**76 ಎಫ್‌ಎಫ್.– ನಿರ್ದಿಷ್ಟ ಅಭಿವೃದ್ಧಿಯನ್ನು ಮತ್ತು ಭೂ ಬಳಕೆಯ ಬದಲಾವಣೆಗಳನ್ನು ಸಕ್ರಮಗೊಳಿಸುವುದು.–** (1) ಈ ಅಧಿನಿಯದಲ್ಲಿ ಏನೇ ಒಳಗೊಂಡಿದ್ದರೂ, ಯಾವುದೇ ಭೂಮಿಯನ್ನು 14, 14ಎ, 15ನೇ ಪ್ರಕರಣವನ್ನು, 17ನೇ ಪ್ರಕರಣವನ್ನು ಅಥವಾ ವಿನಿಯಮನಗಳನ್ನು ಉಲ್ಲಂಘಿಸಿ ಅಥವಾ 15ನೇ ಪ್ರಕರಣದ ಮೇರೆಗೆ ನೀಡಿದ ಪ್ರಾರಂಭ ಪ್ರಮಾಣಪತ್ರವನ್ನು ಉಲ್ಲಂಘಿಸಿ ಅಭಿವೃದ್ಧಿ ಮಾಡಿರುವಲ್ಲಿ ಅಥವಾ ಭೂ ಬಳಕೆಯಲ್ಲಿ ಬದಲಾವಣೆ ಮಾಡಿರುವಲ್ಲಿ, ಯೋಜನಾ ಪ್ರಾಧಿಕಾರವು, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2004ರ ಪ್ರಾರಂಭದ ದಿನಾಂಕಕ್ಕೆ ಮುಂಚೆ ಮಾಡಿದ ಅಂಥ ಅಭಿವೃದ್ಧಿಯನ್ನು ಮತ್ತು ಭೂ ಬಳಕೆಯ ಬದಲಾವಣೆಯನ್ನು ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು ಹಾಗೂ ಬೇರೆ ಬೇರೆ ಉದ್ದೇಶಗಳಿಗಾಗಿ ಬೇರೆ ಬೇರೆಯಾಗಿರಬಹುದಾದಂಥ, ಆದರೆ, ಅಭಿವೃದ್ಧಿಯ ಅಂದಾಜು ವೆಚ್ಚವನ್ನು ಮೀರದಂತೆ ನಿಯಮಿಸಿದ ಮೊಬಲಗನ್ನು ಸಂದಾಯ ಮಾಡಿದ ಮೇಲೆ ಸಕ್ರಮಗೊಳಿಸಬಹುದು.

**xx xx xx**

(13) ಈ ಪ್ರಕರಣದ ಮೇರೆಗೆ ಸಕ್ರಮ ಕೋರುವ ಯಾರೇ ವ್ಯಕ್ತಿಯು, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2004 ಪ್ರಾರಂಭವಾದ ದಿನಾಂಕದಿಂದ ಮೂರು ತಿಂಗಳೊಳಗೆ ಯೋಜನಾ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸತಕ್ಕದ್ದು.

**xx xx xx**

**ಕರ್ನಾಟಕ ಪೌರನಿಗಮಗಳ ಅಧಿನಿಯಮ, 1977ರ (1977ರ ಕರ್ನಾಟಕ ಅಧಿನಿಯಮ 14) ಉದ್ಧೃತ ಭಾಗ**

**xx xx xx**

**321–ಎ.– ಕೆಲವು ಕಾನೂನುಬಾಹಿರ ಕಟ್ಟಡಗಳನ್ನು ಸಕ್ರಮಗೊಳಿಸುವುದು.–** (1) ಈ ಅಧಿನಿಮಯದಲ್ಲಿ ಏನೇ ಒಳಗೊಂಡಿದ್ದರೂ, 300ನೇ ಪ್ರಕರಣವನ್ನು, 321ನೇ ಪ್ರಕರಣವನ್ನು, ಮತ್ತು 423ನೇ ಪ್ರಕರಣದ ಅಡಿಯಲ್ಲಿ ರಚಿಸಿದ ಕಟ್ಟಡ ಉಪವಿಧಿಗಳನ್ನು ಉಲ್ಲಂಘಿಸಿ ಯಾವುದೇ ಕಟ್ಟಡ ನಿರ್ಮಾಣವನ್ನು ಪೂರ್ಣಗೊಳಿಸಿದ್ದಲ್ಲಿ, ಕಮೀಷನರನು, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2004ರ ಪ್ರಾರಂಭದ ದಿನಾಂಕಕ್ಕೆ ಮುಂಚೆ ನಿರ್ಮಿಸಿದ್ದ ಕಟ್ಟಡವನ್ನು ಈ ಮುಂದೆ ಹೇಳಿದ ನಿರ್ಬಂಧಗಳಿಗೆ ಮತ್ತು ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು ಹಾಗೂ (2)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಮೊಬಲಗನ್ನು ಸಂದಾಯ ಮಾಡಿದ ಮೇಲೆ ಸಕ್ರಮಗೊಳಿಸಬಹುದು.

**xx xx xx**

(2) ಈ ಪ್ರಕರಣದ ಅಡಿಯಲ್ಲಿ ಯಾವುದೇ ನಿರ್ಮಾಣದ ಸಕ್ರಮಗೊಳಿಸುವಿಕೆಯು ನಿಯಮಿಸಬಹುದಾದ ಮೊಬಲಗಿನ ಸಂದಾಯಕ್ಕೊಳಪಟ್ಟಿರತಕ್ಕದ್ದು, ಇದು ಕಟ್ಟಡ ಉಪವಿಧಿಗಳ ಬೇರೆ ಬೇರೆ ಬಗೆಯ ಉಲ್ಲಂಘನೆಗಳಿಗಾಗಿ ಬೇರೆ ಬೇರೆಯಾಗಿರಬಹುದು.

"ಪರಂತು ಹಾಗೆ ನಿಯಮಿಸಲಾದ ಮೊಬಲಗನ್ನು,–

(i) ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿರುವ ಕಟ್ಟಡ ಭಾಗದ ಸಂಬಂಧದಲ್ಲಿ, ಕಟ್ಟಡದ ಸುತ್ತ ಬಿಡಬೇಕಾದ ಖಾಲಿ ಜಾಗದ ಮಾನಕಗಳನ್ನು ಮತ್ತು ಅನುಮತಿಸಬಹುದಾದ ಫ್ಲೋರ್ ಏರಿಯಾದ ಅನುಪಾತದ ಅಂಥ ಉಲ್ಲಂಘನೆಯು, ಶೇಕಡಾ ಇಪ್ಪತ್ತೈದರಷ್ಟನ್ನು ಮೀರದಿದ್ದರೆ, ಕರ್ನಾಟಕ ಸ್ಟಾಂಪು ಅಧಿನಿಯಮ, 1957 ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾದಂತೆ ಮಾರುಕಟ್ಟೆ ಮೌಲ್ಯದ ಶೇಕಡಾ ಹತ್ತಕ್ಕಿಂತ ಕಡಿಮೆ ಇರತಕ್ಕದ್ದಲ್ಲ;

(ii) ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿರುವ ಕಟ್ಟಡ ಭಾಗದ ಸಂಬಂಧದಲ್ಲಿ, ಕಟ್ಟಡದ ಸುತ್ತ ಬಿಡಬೇಕಾದ ಖಾಲಿ ಜಾಗದ ಮಾನಕಗಳನ್ನು ಮತ್ತು ಅನುಮತಿಸಬಹುದಾದ ಫ್ಲೋರ್ ಏರಿಯಾದ ಅನುಪಾತದ ಅಂಥ ಉಲ್ಲಂಘನೆಯು, ಶೇಕಡಾ ಇಪ್ಪತ್ತೈದನ್ನು ಮೀರಿದ್ದು, ಆದರೆ ಶೇಕಡಾ ಐವತ್ತರಷ್ಟನ್ನು ಮೀರದಿದ್ದರೆ, ಕರ್ನಾಟಕ ಸ್ಟಾಂಪು ಅಧಿನಿಯಮ, 1957 ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾದಂತೆ ಮಾರುಕಟ್ಟೆ ಮೌಲ್ಯದ ಶೇಕಡಾ ಇಪ್ಪತ್ತೈದರಷ್ಟಕ್ಕಿಂತ ಕಡಿಮೆ ಇರತಕ್ಕದ್ದಲ್ಲ;

ಮತ್ತೂ ಪರಂತು ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ಕಟ್ಟಡದ ಭಾಗವನ್ನು ಬಳಸಲಾಗುತ್ತಿದ್ದರೆ ಅಥವಾ ನಿವಾಸೇತರ ಉದ್ದೇಶಕ್ಕಾಗಿದ್ದರೆ, ಅಂಥ ಭಾಗದ ಸಕ್ರಮಕ್ಕಾಗಿ ಸಂದಾಯ ಮಾಡಬೇಕಾದ ಮೊಬಲಗು,–

(ಎ) ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿರುವ ಕಟ್ಟಡ ಭಾಗದ ಸಂಬಂಧದಲ್ಲಿ, ಕಟ್ಟಡದ ಸುತ್ತ ಬಿಡಬೇಕಾದ ಖಾಲಿ ಜಾಗದ ಮಾನಕಗಳನ್ನು ಮತ್ತು ಅನುಮತಿಸಬಹುದಾದ ಫ್ಲೋರ್ ಏರಿಯಾದ ಅನುಪಾತದ ಅಂಥ ಉಲ್ಲಂಘನೆಯು, ಶೇಕಡಾ ಹನ್ನೆರಡೂವರೆಯಷ್ಟನ್ನು ಮೀರದಿದ್ದರೆ, ಕರ್ನಾಟಕ ಸ್ಟಾಂಪು ಅಧಿನಿಯಮ, 1957 ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾದಂತೆ ಮಾರುಕಟ್ಟೆ ಮೌಲ್ಯದ ಶೇಕಡ ಇಪ್ಪತ್ತೈದರಷ್ಟು ಆಗಿರತಕ್ಕದ್ದು;

(ಬಿ) ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿರುವ ಕಟ್ಟಡ ಭಾಗದ ಸಂಬಂಧದಲ್ಲಿ, ಕಟ್ಟಡದ ಸುತ್ತ ಬಿಡಬೇಕಾದ ಖಾಲಿ ಜಾಗದ ಮಾನಕಗಳನ್ನು ಮತ್ತು ಅನುಮತಿಸಬಹುದಾದ ಫ್ಲೋರ್ ಏರಿಯಾದ ಅನುಪಾತದ ಅಂಥ ಉಲ್ಲಂಘನೆಯು, ಶೇಕಡಾ ಹನ್ನೆರಡೂವರೆಯಷ್ಟನ್ನು ಮೀರಿದ್ದು ಆದರೆ ಶೇಕಡಾ ಇಪ್ಪತ್ತೈದರಷ್ಟನ್ನು ಮೀರದಿದ್ದರೆ, ಕರ್ನಾಟಕ ಸ್ಟಾಂಪು ಅಧಿನಿಯಮ, 1957 ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾದಂತೆ ಮಾರುಕಟ್ಟೆ ಮೌಲ್ಯದ ಶೇಕಡ ನಲವತ್ತರಷ್ಟು ಆಗಿರತಕ್ಕದ್ದು;"

**xx xx xx**

**ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 22) ಉದ್ಧೃತ ಭಾಗ**

**187-ಎ. ಕೆಲವು ಕಾನೂನುಬಾಹಿರ ಕಟ್ಟಡಗಳನ್ನು ಸಕ್ರಮಗೊಳಿಸುವುದು.-** (1) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, 187ನೇ ಪ್ರಕರಣವನ್ನು ಕಟ್ಟಡ ಉಪವಿಧಿಗಳನ್ನು ಉಲ್ಲಂಘಿಸಿ ಯಾವುದೇ ಕಟ್ಟಡ ನಿರ್ಮಾಣವನ್ನು ಪೂರ್ಣಗೊಳಿಸಿದ್ದಲ್ಲಿ, ಮುನಿಸಿಪಲ್ ಕಮೀಷನರನು, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2004ರ ಪ್ರಾರಂಭದ ದಿನಾಂಕಕ್ಕೆ ಮುಂಚೆ ನಿರ್ಮಿಸಿದ್ದ ಕಟ್ಟಡವನ್ನು ಈ ಮುಂದೆ ಹೇಳಿದ ನಿರ್ಬಂಧಗಳಿಗೆ ಮತ್ತು ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು ಹಾಗೂ (2)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಮೊಬಲಗನ್ನು ಸಂದಾಯ ಮಾಡಿದ ಮೇಲೆ ಸಕ್ರಮಗೊಳಿಸಬಹುದು.

**xx xx xx**

(2) ಈ ಪ್ರಕರಣದ ಅಡಿಯಲ್ಲಿ ಯಾವುದೇ ನಿರ್ಮಾಣದ ಸಕ್ರಮಗೊಳಿಸುವಿಕೆಯು ನಿಯಮಿಸಬಹುದಾದ ಮೊಬಲಗಿನ ಸಂದಾಯಕ್ಕೊಳಪಟ್ಟಿರತಕ್ಕದ್ದು, ಇದು ಕಟ್ಟಡ ಉಪವಿಧಿಗಳ ಬೇರೆ ಬೇರೆ ಬಗೆಯ ಉಲ್ಲಂಘನೆಗಳಿಗಾಗಿ ಬೇರೆ ಬೇರೆಯಾಗಿರಬಹುದು.

"ಪರಂತು ಹಾಗೆ ನಿಯಮಿಸಲಾದ ಮೊಬಲಗನ್ನು,-

(i) ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿರುವ ಕಟ್ಟಡ ಭಾಗದ ಸಂಬಂಧದಲ್ಲಿ, ಕಟ್ಟಡದ ಸುತ್ತ ಬಿಡಬೇಕಾದ ಖಾಲಿ ಜಾಗದ ಮಾನಕಗಳನ್ನು ಮತ್ತು ಅನುಮತಿಸಬಹುದಾದ ಫ್ಲೋರ್ ಏರಿಯಾದ ಅನುಪಾತದ ಅಂಥ ಉಲ್ಲಂಘನೆಯು, ಶೇಕಡಾ ಇಪ್ಪತ್ತೈದರಷ್ಟನ್ನು ಮೀರದಿದ್ದರೆ, ಕರ್ನಾಟಕ ಸ್ಟಾಂಪು ಅಧಿನಿಯಮ, 1957 ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾದಂತೆ ಮಾರುಕಟ್ಟೆ ಮೌಲ್ಯದ ಶೇಕಡಾ ಹತ್ತರಷ್ಟಕ್ಕಿಂತ ಕಡಿಮೆ ಇರತಕ್ಕದ್ದಲ್ಲ;

(ii) ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿರುವ ಕಟ್ಟಡ ಭಾಗದ ಸಂಬಂಧದಲ್ಲಿ, ಕಟ್ಟಡದ ಸುತ್ತ ಬಿಡಬೇಕಾದ ಖಾಲಿ ಜಾಗದ ಮಾನಕಗಳನ್ನು ಮತ್ತು ಅನುಮತಿಸಬಹುದಾದ ಫ್ಲೋರ್ ಏರಿಯಾದ ಅನುಪಾತದ ಅಂಥ ಉಲ್ಲಂಘನೆಯು, ಶೇಕಡಾ ಇಪ್ಪತ್ತೈದನ್ನು ಮೀರಿದ್ದು, ಆದರೆ ಶೇಕಡಾ ಐವತ್ತರಷ್ಟನ್ನು ಮೀರದಿದ್ದರೆ, ಕರ್ನಾಟಕ ಸ್ಟಾಂಪು ಅಧಿನಿಯಮ, 1957 ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾದಂತೆ ಮಾರುಕಟ್ಟೆ ಮೌಲ್ಯದ ಶೇಕಡಾ ಇಪ್ಪತ್ತೈದರಷ್ಟಕ್ಕಿಂತ ಕಡಿಮೆ ಇರತಕ್ಕದ್ದಲ್ಲ;

ಮತ್ತೂ ಪರಂತು ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ಕಟ್ಟಡದ ಭಾಗವನ್ನು ಬಳಸಲಾಗುತ್ತಿದ್ದರೆ ಅಥವಾ ನಿವಾಸೇತರ ಉದ್ದೇಶಕ್ಕಾಗಿದ್ದರೆ, ಅಂಥ ಭಾಗದ ಸಕ್ರಮಕ್ಕಾಗಿ ಸಂದಾಯ ಮಾಡಬೇಕಾದ ಮೊಬಲಗು,-

(ಎ) ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿರುವ ಕಟ್ಟಡ ಭಾಗದ ಸಂಬಂಧದಲ್ಲಿ, ಕಟ್ಟಡದ ಸುತ್ತ ಬಿಡಬೇಕಾದ ಖಾಲಿ ಜಾಗದ ಮಾನಕಗಳನ್ನು ಮತ್ತು ಅನುಮತಿಸಬಹುದಾದ ಫ್ಲೋರ್ ಏರಿಯಾದ ಅನುಪಾತದ ಅಂಥ ಉಲ್ಲಂಘನೆಯು, ಶೇಕಡಾ ಹನ್ನೆರಡೂವರೆಯಷ್ಟನ್ನು ಮೀರದಿದ್ದರೆ, ಕರ್ನಾಟಕ ಸ್ಟಾಂಪು ಅಧಿನಿಯಮ, 1957 ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾದಂತೆ ಮಾರುಕಟ್ಟೆ ಮೌಲ್ಯದ ಶೇಕಡ ಇಪ್ಪತ್ತೈದರಷ್ಟು ಆಗಿರತಕ್ಕದ್ದು;

(ಬಿ) ಮೇಲೆ ಉಲ್ಲೇಖಿಸಲಾದ ಉಪಬಂಧಗಳನ್ನು ಉಲ್ಲಂಘಿಸಿ ನಿರ್ಮಿಸಿರುವ ಕಟ್ಟಡ ಭಾಗದ ಸಂಬಂಧದಲ್ಲಿ, ಕಟ್ಟಡದ ಸುತ್ತ ಬಿಡಬೇಕಾದ ಖಾಲಿ ಜಾಗದ ಮಾನಕಗಳನ್ನು ಮತ್ತು ಅನುಮತಿಸಬಹುದಾದ ಫ್ಲೋರ್ ಏರಿಯಾದ ಅನುಪಾತದ ಅಂಥ ಉಲ್ಲಂಘನೆಯು, ಶೇಕಡಾ ಹನ್ನೆರಡೂವರೆಯಷ್ಟನ್ನು ಮೀರಿದ್ದು ಆದರೆ ಶೇಕಡಾ ಇಪ್ಪತ್ತೈದರಷ್ಟನ್ನು ಮೀರದಿದ್ದರೆ, ಕರ್ನಾಟಕ ಸ್ಟಾಂಪು ಅಧಿನಿಯಮ, 1957 ಮತ್ತು ಅದರ ಮೇರೆಗೆ ರಚಿಸಿದ ನಿಯಮಗಳಿಗೆ ಅನುಸಾರವಾಗಿ ನಿರ್ಧರಿಸಲಾದಂತೆ ಮಾರುಕಟ್ಟೆ ಮೌಲ್ಯದ ಶೇಕಡ ನಲವತ್ತರಷ್ಟು ಆಗಿರತಕ್ಕದ್ದು;"

**xx xx xx**

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**FIFTH SESSION**

**THE KARNATAKA TOWN AND COUNTRY PLANNING AND CERTAIN OTHER LAWS (AMENDMENT) BILL, 2009**

**(L.A. Bill No. 43 of 2009)**

A Bill further to amend the Karnataka Town and Country Planning Act, 1961, the Karnataka Municipal Corporations Act, 1976 and the Karnataka Municipalities Act, 1964.

Whereas it is expedient further to amend the Karnataka Town and Country Planning Act, 1961, (Karnataka Act 11 of 1963), the Karnataka Municipal Corporations Act, 1976 (Karnataka Act 14 of 1977) and the Karnataka Municipalities Act, 1964 (Karnataka Act 22 of 1964) for the purposes hereinafter appearing;

Be it enacted by the Karnataka State Legislature in the sixtieth year of the Republic of India as follows:-

**1. Short title and commencement.-** (1) This Act may be called the Karnataka Town and Country Planning and Certain Other Laws (Amendment) Act, 2009.

(2) It shall come into force at once.

**2. Amendment of Karnataka Act 11 of 1963.-** In the Karnataka Town and Country Planning Act, 1961 (Karnataka Act 11 of 1963), in section 76FF,-

(1) in sub-section (1), for the words, brackets and figures "date of commencement of the Karnataka Town and Country Planning and Certain other Laws (Amendment) Act, 2004", the words and figures "the 3rd day of December 2009" shall be substituted;

(2) after sub-section (1), the following provisos shall be inserted, namely:-

"Provided that the amount so prescribed shall not be less than,-

(i) six percent of the market value, determined in accordance with the Karnataka Stamp Act, 1957 and rules made thereunder, of the portion of the building built in violation of the provisions referred to above, if such violation of set back norms and permissible floor area ratio does not exceed twenty five percent;

(ii) eight percent of the market value, determined in accordance with the Karnataka Stamp Act, 1957 and the rules made thereunder, of the portion of the building built in violation of the provisions referred to above, if such violation of set back norms and permissible floor area ratio exceeds twenty five percent but does not exceed fifty percent:

Provided further that where the portion of the building is built in violation of the provisions referred to above is being used or meant for nonresidential purpose and amount payable for regularization of such portion shall be,-

(a) twenty percent of the market value, determined in accordance with the Karnataka Stamp Act, 1957 and the rules made thereunder, of the portion of the building built in violation of the provisions referred to above, if such violation of set back norms and permissible floor area ratio does not exceed twelve and a half percent;

(b) thirty five percent of the market value, determined in accordance with the Karnataka Stamp Act, 1957 and the rules made thereunder, of the portion of the building built in violation of the provisions referred to above, if such violation of set back norms and permissible floor area ratio exceeds twelve and a half percent but does not exceed twenty five percent."; and

(3) for sub section (13), the following shall be substituted, namely:-

" (13) Any person seeking regularization under this section shall make application to the prescribed Authority within one year from the date of commencement of the Karnataka Town and Country Planning and Certain Other Laws (Amendment) Act, 2009."

**3. Amendment of Karnataka Act 14 of 1977.-** In the Karnataka Municipal Corporations Act, 1976 (Karnataka Act 14 of 1977), in section 321-A,-

(1) in sub-section (1), for the words, brackets and figures "date of commencement of the Karnataka Town and Country Planning and Certain other Laws (Amendment) Act, 2004", the words and figures "the 3rd day of December 2009" shall be substituted;

(2) in sub-section (2),-

(i) in the first proviso,-

(a) in clause (i) for the word "ten", the word "six" shall be substituted; and

(b) in clause (ii) for the words "twenty five", the word "eight" shall be substituted; and

(ii) in the second proviso,-

(a) in clause (a), for the words "twenty five", the word "twenty" shall be substituted; and

(b) in clause (b), for the word "forty", the words "thirty five" shall be substituted.

**4. Amendment of Karnataka Act 22 of 1964.-** In the Karnataka Municipalities Act,1964 (Karnataka Act 22 of 1964), in section 187A,-

(1) in sub-section(1), for the words, brackets and figures "date of commencement of the Karnataka Town and Country Planning and Certain other Laws (Amendment) Act, 2004", the words and figures "the 3rd day of December 2009" shall be substituted;

(2) in sub-section (2),-

(i) in the first proviso,-

(a) in clause (i) for the word "ten" the word "six" shall be substituted; and

(b) in clause(ii) for the words "twenty five" the word "eight" shall be substituted; and

(ii) in the second proviso,-

(a) in clause (a), for the words "twenty five" the word "twenty" shall be substituted; and

(b) in clause (b), for the word "forty" the words "thirty five" shall be substituted.

**STATEMENT OF OBJECTS AND REASONS**

It is considered necessary to amend the Karnataka Town and Country Planning Act, 1961 (Karnataka Act 11 of 1963 ), the Karnataka Municipal Corporations Act, 1976 (Karnataka Act 14 of 1977) and the Karnataka Municipalities Act, 1964 (Karnataka Act 22 of 1964) to provide for,-

(a) extension of time limit for filing application for regularisation by one year from the date of commencement of this Amendment Act;

(b) regularisation of buildings constructed in violation of provisions of law and building bye law prior to 3rd day of December 2009; and

(c) reduction of fee/amount for regularisation of such buildings;

Hence the Bill.

**FINANCIAL MEMORANDUM**

There is no extra expenditure involved in the proposed legislative measure.

**B.S. YUDDYURAPPA**
CHIEF MINISTER

**S.B. PATIL**
Secretary
Karnataka Legislative Assembly

**ANNEXURE**

**Extract from the Karnataka Town and Country Planning Act,1961 (Karnataka Act 11 of 1963).**

XX XX XX

**[76 FF. Regularisation of certain development and change of land use.-**(1) Notwithstanding anything contained in this Act, where any land has been developed or change in land use is made in contravention of section 14, 14A, section 15, section 17 or the regulations or in contravention of commencement certificate granted under section 15, the Planning Authority may regularise such development and change of land use made prior to the date of commencement of the Karnataka Town and Country Planning and Certain other Laws (Amendment) Act, 2004, subject to such rules as may be prescribed and on payment of the prescribed amount, which may be different for different purposes, but not exceeding the estimated cost of the development.

XX XX XX

(13) Any person seeking regularization under this section shall make an application to the Planning Authority within three months from the date of commencement of the Karnataka Town and Country Planning and Certain Other Laws (Amendment) Act, 2004.

XX XX XX

**Extract from the Karnataka Municipal Corporations Act,1976 (Karnataka Act 14 of 1977)**

XX XX XX

**321-A. Regularisation of certain unlawful buildings.-** (1) Notwithstanding anything contained in this Act, when construction of any building is completed in contravention of the section 300, section 321 and building by laws made under section 423, the Commissioner may regularise building constructed prior to the date of commencement of the Karnataka Town and Country Planning and Certain other Laws (Amendment) Act, 2004 subject to the following restrictions and such rules as may be prescribed and on payment of the amount specified in sub-section (2), namely:-

XX XX XX

(2) Regularisation of any construction under this section shall be subject to payment of the prescribed amount which may be different for different types of contravention of building bye-laws;

Provided that the amount so prescribed shall not be less than,-

(i) ten percent of the market value, determined in accordance with the Karnataka Stamp Act, 1957 and rules made thereunder, of the portion of the building built in violation of the provisions referred to above, if such violation of set back norms and permissible floor area ratio does not exceed twenty five percent;

(ii) twenty five percent of the market value, determined in accordance with the Karnataka Stamp Act, 1957 and the rules made thereunder, of the portion of the building built in violation of the provisions referred to above, if such violation of set back norms and permissible floor area ratio exceeds twenty five percent but does not exceed fifty percent:

Provided further that where the portion of the building is built in violation of the provisions referred to above is being used or meant for nonresidential purpose and amount payable for regularization of such portion shall be,-

(a) twenty five percent of the market value, determined in accordance with the Karnataka Stamp Act, 1957 and the rules made thereunder, of the portion of the building built in violation of the provisions referred to above, if such violation of set back norms and permissible floor area ratio does not exceed twelve and a half percent;

(b) forty percent of the market value, determined in accordance with the Karnataka Stamp Act, 1957 and the rules made thereunder, of the portion of the building built in violation of the provisions referred to above, if such violation of set back norms and permissible floor area ratio exceeds twelve and a half percent but does not exceed twenty five percent.

XX XX XX

**Extract from the Karnataka Municipalities Act,1964**
**(Karnataka Act 22 of 1964)**

XX XX XX

**187-A. Regularisation of certain unlawful building.-(**1) Notwithstanding anything contained in this Act, when construction of any building is completed in contravention of section 187 and building bye-laws, the Municipal Commissioner or the Chief Officer, as the case may be, may regularise building constructed prior to the date of commencement of the Karnataka Town and Country Planning and Certain other Laws (Amendment) Act, 2004, subject to the following restrictions and such rules as may be prescribed and on payment of the amount specified in subsection (2), namely:-

XX XX XX

(2) Regularisation of any construction under this section shall be subject to payment of the prescribed amount which may be different for different types of contravention of building bye-laws;

Provided that the amount so prescribed shall not be less than,-

(i) ten percent of the market value, determined in accordance with the Karnataka Stamp Act, 1957 and rules made thereunder, of the portion of the building built in violation of the provisions referred to above, if such violation of set back norms and permissible floor area ratio does not exceed twenty five percent;

(ii) twenty five percent of the market value, determined in accordance with the Karnataka Stamp Act, 1957 and the rules made thereunder, of the portion of the building built in violation of the provisions referred to above, if such

